





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಅಲ್ಲ,[1] ನಾನು ಈ (ಮಕ್ಕಾ) ಪಟ್ಟಣದ ಆಣೆ ಹಾಕುತ್ತೇನೆ-

لَآ اُقْسِمُ بِهٰذَا الْبَلَدِ ①

2. (ಸಂದೇಶವಾಹಕರೇ) ಈ ಪಟ್ಟಣದಲ್ಲಿ ನಿಮ್ಮನ್ನು 'ಧರ್ಮಸಮ್ಮತ' ಗೊಳಿಸಿಕೊಳ್ಳಲಾಗಿದೆ-[2]

وَ اَنْتَ حِلٌّۢ بِهٰذَا الْبَلَدِ ②

3. ಮತ್ತು ನಾನು ತಂದೆಯ ಹಾಗೂ ಅವನಿಂದ ಜನಿಸಿದ ಮಕ್ಕಳ ಆಣೆ ಹಾಕುತ್ತೇನೆ-

وَ وَالِدٍ وَّ مَا وَلَدَ ③

4. ವಾಸ್ತವದಲ್ಲಿ ನಾವು ಮಾನವನನ್ನು ಸಂಕಷ್ಟದಲ್ಲೇ ಸೃಷ್ಟಿಸಿದ್ದೇವೆ.[3]

لَقَدْ خَلَقْنَا الْاِنْسَانَ فِيْ كَبَدٍ ④

5. ಅವನನ್ನು ಯಾರೂ ನಿಯಂತ್ರಿಸಲಾರರೆಂದು ಅವನು ಭಾವಿಸಿ ರುವನೇ?

اَيَحْسَبُ اَنْ لَّنْ يَّقْدِرَ عَلَيْهِ اَحَدٌ ⑤

6. ನಾನು ಧನರಾಶಿಯನ್ನೇ ಖರ್ಚು ಮಾಡಿ ಬಿಟ್ಟೆನೆಂದು ಅವನು ಹೇಳುತ್ತಾನೆ.

يَقُوْلُ اَهْلَكْتُ مَالًا لُّبَدًا ⑥

7. ಅವನನ್ನು ಯಾರೂ ಕಂಡಿಲ್ಲವೆಂದು ಅವನು ಭಾವಿಸುತ್ತಾನೆಯೇ?[4]

اَيَحْسَبُ اَنْ لَّمْ يَرَهٗۤ اَحَدٌ ⑦

8-9. ನಾವು ಅವನಿಗೆ ಎರಡು ಕಣ್ಣುಗಳನ್ನೂ ಒಂದು ನಾಲಗೆಯನ್ನೂ

اَلَمْ نَجْعَلْ لَّهٗ عَيْنَيْنِ ⑧

---

1. ಅರ್ಥಾತ್- ನೀವು ಭಾವಿಸಿಕೊಂಡಿರುವುದು ಸತ್ಯವಲ್ಲ.
2. ಅರ್ಥಾತ್- ಪ್ರಾಣಿಗಳಿಗೂ ಅಭಯ ಪ್ರಾಪ್ತವಿರುವ ಈ ನಗರದಲ್ಲಿ ನಿಮ್ಮ ಮೇಲೆ ಅಕ್ರಮವೆಸಗುವುದನ್ನು ಧರ್ಮಸಮ್ಮತಗೊಳಿಸಲಾಗಿದೆ.
3. ಅರ್ಥಾತ್- ಈ ಲೋಕ ಮಾನವನಿಗೆ ಸವಿಯುಣ್ಣುವ ಮತ್ತು ಸುಖದ ಸುಪ್ಪತ್ತಿಗೆಯಲ್ಲಿರುವ ಸ್ಥಳವಲ್ಲ. ಬದಲಾಗಿ ಇದು ಪರಿಶ್ರಮಪಡುವ ಮತ್ತು ಕಾಠಿಣ್ಯಗಳನ್ನು ಸಹಿಸಿಕೊಳ್ಳುವ ಸ್ಥಳವಾಗಿದೆ. ಯಾವ ಮಾನವನೂ ಈ ಪರಿಸ್ಥಿತಿಯಿಂದ ದಾಟದಿರಲಾರ.
4. ಅರ್ಥಾತ್- ದುರಹಂಕಾರವನ್ನು ಮೆರೆಯುವ ವ್ಯಕ್ತಿಗೆ, ಇದನ್ನೆಲ್ಲಾ ನೋಡುವ ದೇವನೊಬ್ಬ ಮೇಲಿದ್ದಾನೆ. ಈ ಸಂಪತ್ತನ್ನು ಯಾವ ಮೂಲದಿಂದ ಗಳಿಸಿ ಯಾವುದರಲ್ಲಿ ಖರ್ಚು ಮಾಡಿದೆ ಎಂದು ಅವನು ನೋಡುತ್ತಿದ್ದಾನೆಂದು ತಿಳಿದಿಲ್ಲವೇ?

ಎರಡು ತುಟಿಗಳನ್ನೂ ಕೊಟ್ಟಿಲ್ಲವೇ?[5]

وَلِسَانًا وَّشَفَتَيْنِ ۝٩

10. ಮತ್ತು ಅವನಿಗೆ ಎರಡು ಸುಸ್ಪಷ್ಟ ದಾರಿಗಳನ್ನು ತೋರಿಸಿ ಕೊಡಲಿಲ್ಲವೇ?

وَهَدَيْنٰهُ النَّجْدَيْنِ ۝١٠

11. ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ.

فَلَا اقْتَحَمَ الْعَقَبَةَ ۝١١

12. ಆ ದುರ್ಗಮ ಏರು ಏನೆಂದು ನಿಮಗೇನು ಗೊತ್ತು?

وَمَآ اَدْرٰىكَ مَا الْعَقَبَةُ ۝١٢

13. ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿಂದ ವಿಮೋಚಿಸುವುದು-

فَكُّ رَقَبَةٍ ۝١٣

14-16. ಅಥವಾ ಹಸಿವಿನ ದಿನ, ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೆಟ್ಟ ದರಿದ್ರನಿಗೆ ಉಣಬಡಿಸುವುದು.

اَوْ اِطْعٰمٌ فِيْ يَوْمٍ ذِيْ مَسْغَبَةٍ ۝١٤
يَّتِيْمًا ذَا مَقْرَبَةٍ ۝١٥
اَوْ مِسْكِيْنًا ذَا مَتْرَبَةٍ ۝١٦

17. ತರುವಾಯ, ಸತ್ಯವಿಶ್ವಾಸವಿರಿಸಿದ ಹಾಗೂ ಪರಸ್ಪರರಿಗೆ ಸಹನೆ ಮತ್ತು (ಸೃಷ್ಟಿಗಳ ಮೇಲೆ) ಕರುಣೆಯನ್ನು ಬೋಧಿಸಿದ ಜನರ ಸಾಲಿಗೆ ಸೇರುವುದು.

ثُمَّ كَانَ مِنَ الَّذِيْنَ اٰمَنُوْا وَتَوَاصَوْا بِالصَّبْرِ وَتَوَاصَوْا بِالْمَرْحَمَةِ ۝١٧

18. ಇವರೇ ಬಲಗಡೆಯವರು.

اُولٰٓىِٕكَ اَصْحٰبُ الْمَيْمَنَةِ ۝١٨

19. ಮತ್ತು ನಮ್ಮ ಸೂಕ್ತಗಳನ್ನು ತಿರಸ್ಕರಿಸಿದವರು ಎಡಗಡೆಯವರು.[6]

وَالَّذِيْنَ كَفَرُوْا بِاٰيٰتِنَا هُمْ اَصْحٰبُ الْمَشْـَٔمَةِ ۝١٩

20. ಅವರ ಮೇಲೆ ನರಕಾಗ್ನಿಯು ಆವರಿಸಿಕೊಂಡಿರುವುದು.

عَلَيْهِمْ نَارٌ مُّؤْصَدَةٌ ۝٢٠

---

5. ಅರ್ಥಾತ್- ನಾವು ಜ್ಞಾನ ಮತ್ತು ವಿವೇಕದ ಮೂಲಗಳನ್ನು ನೀಡಿಲ್ಲವೇ?

6. ಬಲಗಡೆಯವರು ಮತ್ತು ಎಡಗಡೆಯವರು ಎಂಬುದರ ವಿವರಣೆಗೆ ಅಲ್ ವಾಕಿಅಃ ಅಧ್ಯಾಯದ 8,9,27 ಮತ್ತು 41ನೆಯ ಸೂಕ್ತಗಳನ್ನು ನೋಡಿರಿ.